ದೇವರಕೊಂಡಾರೆಡ್ಡಿ

# ಗುಮ್ಮಳಾಪುರದ ಗೌರಮ್ಮನಗುಡಿಯ ಶಿಲಾಶಾಸನ

ಬೆಂಗಳೂರಿಗೆ ಸುಮಾರು ೪೫ ಕಿಲೋಮೀಟರ್ ದೂರದಲ್ಲಿರುವ ಗುಮ್ಮಳಾಪುರ ಗ್ರಾಮವು ಇಂದು ರಾಜಕೀಯವಾಗಿ ತಮಿಳುನಾಡಿಗೆ ಸೇರಿದೆ. ಪ್ರಸ್ತುತ ಶಾಸನವು ಅಲ್ಲಿಯ ಗೌರಮ್ಮನ ಗುಡಿಯ ಮುಂದೆ ಇದೆ. ಕನ್ನಡಭಾಷೆ ಮತ್ತು ಲಿಪಿಯಲ್ಲಿರುವ ಈ ಶಾಸನವು ೨.೪ ಮೀ. ಎತ್ತರ ಮತ್ತು ೦.೮ಮೀ. ಅಗಲವಿದ್ದು, ಸ್ಥಳೀಯ ವಾಗಿ ದೊರೆಯುವ ಗಟ್ಟಿ ಗ್ರಾನೈಟ್ ಕಲ್ಲಿನ ಮೇಲೆ ಕೆತ್ತಲಾಗಿದೆ. ಇದರಲ್ಲಿ ಒಟ್ಟು ೨೯ ಸಾಲುಗಳಿವೆ. ೧೮, ೧೯ ಮತ್ತು ೨೬, ೨೭ನೇ ಸಾಲುಗಳಲ್ಲಿ ಹಲವು ಅಕ್ಷರ ಗಳು ತ್ರುಟಿತವಾಗಿವೆ. ಭಾಷೆ ಮತ್ತು ಲಿಪಿ ಸಮಕಾಲೀನ ವಿಜಯನಗರ ಶಾಸನಗಳಲ್ಲಿದ್ದಂತೆಯೇ ಇದೆ. ಶಾಸನದ ಅಂತ್ಯಭಾಗ ಮಾತ್ರ ಇದ್ದಕ್ಕಿದ್ದಂತೆ ಕೊನೆಯಾದಂತೆ ಭಾಸವಾಗುತ್ತದೆ.

ಶಾಲಿವಾಹನ ಶಕ ೧೫೨೮ನೆಯ ಪರಾಭವ ಸಂವತ್ಸರದ ಕಾರ್ತಿಕ ಬ ೧೨ ಸೋಮವಾರ ಎಂದು ಕಾಲವನ್ನು ಉಲ್ಲೇಖಿಸುತ್ತದೆ ಈ ಶಾಸನ. ಈ ತೇದಿ ವಿವರಗಳು ಕ್ರಿ.ಶ. ೧೬೦೬ನೇ ನವೆಂಬರ್ ೧೭ನೇ ತಾರೀಖಿಗೆ ಸರಿಹೊಂದುತ್ತದೆ. ಈ ಕಾಲಕ್ಕೆ ವಿಜಯನಗರದ ಅರಸ ವೆಂಕಟಪತಿರಾಯನು ಪೆನುಗೊಂಡೆಯಿಂದ ರಾಜ್ಯಭಾರ ಮಾಡುತ್ತಿದ್ದನು. ಅವನ ಕೈಕೆಳಗೆ ಚತುರ್ಥ ಗೋತ್ರದ (ನಾಲ್ಕನೇ ವರ್ಣದವನಾದ) ಇಮ್ಮಡಿ ಕೆಂಪೇಗೌಡನು ಎಲಹಂಕನಾಡ ಪ್ರಭುವಾಗಿದ್ದನೆಂದು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ. ಈ ಇಮ್ಮಡಿ ಕೆಂಪೇಗೌಡನ ತಂದೆ ಕೆಂಪೇಗೌಡನೆಂದೂ ತಾತ ಕೆಂಪ ನಾಚೇಗೌಡನೆಂದೂ ಸ್ಪಷ್ಟವಾಗಿ ಹೇಳಿದೆ.

ದಾನ ಸ್ವೀಕರಿಸಿದ ವ್ಯಕ್ತಿ ನಂಜೇದೇವರು ಅಯ್ಯನವರು. ಈತನನ್ನು ಭಾರದ್ವಾಜಗೋತ್ರದ ಪಡಿವಿಡಿ ವರ್ಗದ ಕೊಲ್ಲಿಪಾಕಿ ರೇವಣಸಿದ್ಧೇಶ್ವರನ ಸಂಪ್ರದಾಯ ಸ್ಥನೆಂದೂ ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತೃನೆಂದೂ ಕರೆದಿದ್ದು. ಇವನ ತಂದೆ ಚೆನ್ನಮಲ್ಲಿಕಾರ್ಜುನದೇವ ಮತ್ತು ತಾತ ನಂಜೇದೇವರು ಎಂದೂ ಉಲ್ಲೇಖಿಸಲಾಗಿದೆ. ಮೇಲೂರಿಗೆ ಸೇರಿದ ಗುಮ್ಮಳಾಪುರವನ್ನು ದಾನವಾಗಿ ನೀಡಲಾಗಿದೆ. ಮೇಲೂರು ಈಗ ಇಲ್ಲ, ಹಾಳೂರಾಗಿದೆ. ಗುಮ್ಮಳಾಪುರ ಇಂದಿಗೂ ಉಳಿದಿದೆ.

ಈ ಶಾಸನದಲ್ಲಿ ಪ್ರಯುಕ್ತವಾಗಿರುವ ಎಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನ ರಾಜ್ಯವು ಗುಮ್ಮಳಾಪುರದವರೆಗೂ ವಿಸ್ತರಿಸಿತ್ತೆ ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ವಾಸ್ತವವಾಗಿ, ಈ ಅವಧಿಯಲ್ಲಿ ಗುಮ್ಮಳಾಪುರದ ಉತ್ತರಕ್ಕಿರುವ ಆನೇಕಲ್ ಪ್ರದೇಶವು ಸುಗಟೂರು ವಂಶದ ದೊರೆ ಇಮ್ಮಡಿ ತಮ್ಮೇಗೌಡನ ಅಧೀನದಲ್ಲಿತ್ತೆಂದು ತಿಳಿದುಬರುತ್ತದೆ. ಸುಗಟೂರು ವಂಶದ ಮುಮ್ಮಡಿ ತಿಮ್ಮೇಗೌಡನ ಕ್ರಿ ಶ. ೧೬೧೪ರ ಶಾಸನವೊಂದರಲ್ಲಿ "ನಂಮರಾಜ್ಯದ ಸಿಂಹಾಸನಕ್ಕೆ ಆಪ್ತರಾದ ಪಟ್ಟದಗುರು ನಂಜೇದೇವರು" ಎಂಬ ಮಾತು ಬಂದಿದೆ.[1]

1 ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೦, ಕೋಲಾರ ೬೪, ಗರುಡನಹಳ್ಳಿ

ಕ್ರಿ.ಶ. ೧೬೨೯(?)ರ ಸರ್ಜಾಪುರದ ಶಾಸನದಲ್ಲಿ ಇದೇ ಮುಮ್ಮಡಿ ತಮ್ಮೇಗೌಡನು ಈತನಿಗೆ ಬೆಳವನಹಳ್ಳಿ ಎಂಬ ಗ್ರಾಮವನ್ನು ದತ್ತಿ ಬಿಟ್ಟ ವಿವರವಿದೆ.[2] ಹಾಗೆಯೇ, ಇಮ್ಮಡಿ ಕೆಂಪೇಗೌಡನ ಯುದ್ಧಸಾಹಸಗಳನ್ನು ವರ್ಣಿಸುವ ಹಾಡುಗಬ್ಬವಾದ ಅಜ್ಞಾತಕವಿಯೋರ್ವನ ಕೃತಿ 'ಕೆಂಪೇಗೌಡನ ಜಯಪ್ರಶಸ್ತಿ'ಯಲ್ಲಿ ಗುಮ್ಮಳಾಪುರದ ಗುರುನಂಜೇಶನ ಪ್ರಸ್ತಾಪ ಬಂದಿದೆ.[3] ಈ ಎರಡೂ ಪಾಳೆಯಗಾರ ವಂಶಿಯರು ವೀರಶೈವ ಧರ್ಮಕ್ಕೆ ಪೋಷಕರಾಗಿದ್ದ ಅಂಶ ವಿರೂಪಾಕ್ಷಪಂಡಿತನ 'ಚೆನ್ನ ಬಸವ ಪುರಾಣ'ದಿಂದ ತಿಳಿದುಬರುತ್ತದೆ.[4] ಅಲ್ಲದೆ ಇವರು ಪರಸ್ಪರ ಬಾಂಧವ್ಯವುಳ್ಳವರಾಗಿದ್ದರೆಂಬ ಅಂಶ ಇತರ ಆಕರಗಳಿಂದಲೂ ತಿಳಿದುಬರುತ್ತದೆ.[5] ಆದರಿಂದಾಗಿ ಈ ಎರಡೂ ಮನೆತನಗಳಿಗೂ ಪ್ರಸ್ತುತ ಶಾಸನದಲ್ಲಿ ಪ್ರಯುಕ್ತವಾಗಿರುವ ನಂಜೇದೇವರು ಅಯ್ಯನವರು ಗುರುವಿನ ಸ್ಥಾನದಲ್ಲಿದ್ದನೆಂದು ಹೇಳಬಹುದು. ಪ್ರಸ್ತುತ ಗುಮ್ಮಳಾಪುರದಲ್ಲಿರುವ ವೀರಶೈವ ಮಠವು ಬಾಳೆಹೊನ್ನೂರು ಸಿಂಹಾಸನದ ಶಾಖಾಮಠವಾಗಿದೆ.

ಗುಮ್ಮಳಾಪುರವು ಒಂದು ಕಾಲದಲ್ಲಿ ಪ್ರಸಿದ್ಧ ಸಾಂಸ್ಕೃತಿಕ ಕೇಂದ್ರವಾಗಿದ್ದಿತು. ಅದರಲ್ಲೂ ವೀರಶೈವ ಧರ್ಮದ ಇತಿಹಾಸದಲ್ಲಿ ಇದಕ್ಕೆ ಗಣನೀಯ ಸ್ಥಾನವಿದೆ ಎಂದು ಹೇಳಬಹುದು. ಗುಮ್ಮಳಾಪುರದಲ್ಲಿ ಪ್ರಭುಗ[6] ಮತ್ತು ಹಲಗ[7] ಎಂಬ ವೀರಶೈವ ಕವಿಗಳು ಆಗಿಹೋಗಿದ್ದಾರೆ. ಈ ಸ್ಥಳದ ಸಿದ್ಧವೀರಣ್ಣೊಡೆಯರ ಹೆಸರು ಪ್ರಸಿದ್ಧ ವೀರಶೈವ ಕೃತಿ 'ಶೂನ್ಯಸಂಪಾದನೆ'ಯೊಂದಿಗೆ ಸಂಬಂಧಪಟ್ಟಿದೆ. ಹದಿನೈದನೇ ಶತಮಾನಕ್ಕೆ ಸೇರಿದ ಗುಮ್ಮಳಾಪುರದ ಸಿದ್ಧಲಿಂಗೇಶ್ವರ ಕವಿಯು 'ಷಟ್ಸ್ಥಲದ ಲಿಂಗಾಂಗ ಸಂಬಂಧ ನಿರ್ವಚನ' ಎಂಬ ಕೃತಿಯನ್ನು ಬರೆದಿದ್ದಾನೆ.[8] ಈತನು ತೋಂಟದ ಸಿದ್ಧಲಿಂಗಯತಿಯ ಶಿಷ್ಯನಿದ್ದಂತೆ ತಿಳಿಯುತ್ತದೆ.

ಈ ಊರಿನಲ್ಲಿ ಬಹಳಷ್ಟು ದೇವಾಲಯಗಳಿದ್ದು ಪಾಳುಬಿದ್ದಿವೆ. ಇಂದಿಗೂ ಸುತ್ತಮುತ್ತಲ ಊರುಗಳ ಜನರ ಬಾಯಲ್ಲಿ ಇಲ್ಲಿನ ವೀರಶೈವ ಭಕ್ತರ ಕಥೆಗಳು ಪ್ರಚಲಿತವಿವೆ. ಗೌರಮ್ಮನ ಪರಿಷೆ ಇಲ್ಲಿ ನಡೆಯುವ ಮುಖ್ಯ ಆಕರ್ಷಣೆ. ಒಂದು ತಿಂಗಳಕಾಲ ನಡೆಯುವ ಈ ಪರಿಷೆಯ ಮುಖ್ಯದೇವತೆ ಗೌರಮ್ಮ. ಗೌರೀ ತಿಂಗಳ ಮೊದಲ ದಿನ ಮಣ್ಣಿನಲ್ಲಿ ಗೌರಿಯ ವಿಗ್ರಹ ಮಾಡಿ ಪ್ರತಿಷ್ಠಾಪಿಸಿ ಮಹಾನವಮಿ ತಿಂಗಳ ಅಮಾವಾಸ್ಯೆ ಕಳೆದ ಮೇಲೆ ಬರುವ ಗುರುವಾರದಂದು ಗೌರಿಯನ್ನು ನೀರಿಗೆ ಬಿಡುತ್ತಾರೆ. ಈ ಗೌರಿ, ಒಂದು ವರ್ಷ ಬಾಣಂತಿ, ಒಂದು ವರ್ಷ ಬಸುರಿ ಎಂಬ ನಂಬಿಕೆ ಭಕ್ತರಲ್ಲಿದೆ. ಇಲ್ಲಿಯ ಗಣಪತಿಯನ್ನು ಗೂಳೂರು ಗಣಪತಿ ಎಂದು ಕರೆಯುತ್ತಾರೆ.

ಒಟ್ಟಾರೆ, ಇನ್ನೂ ಇಲ್ಲಿಯ ವೀರಶೈವ ಪರಂಪರೆ ಮತ್ತು ಮಠಗಳ ಬಗೆಗೆ ಅಧ್ಯಯನ ನಡೆಯಬೇಕಾದ ಅಗತ್ಯವಿದೆ.

**ಶಾಸನದ ಪಾಠ**

೧ ಶಿವಾಯ ನಮಃ
೨ ಶುಭಮಸ್ತು ಸ್ವಸ್ತಿಶ್ರೀ ವಿ
೩ ಜಯಾಭ್ಯುದಯ ಶಾಲಿ

---

2 ಅದೇ, ಸಂಪುಟ ೯, ಆನೇಕಲ್ ೧೦
3 ಕರ್ಲಮಂಗಲಂ ಶ್ರೀಕಂಠಯ್ಯ (ಸಂ.) : ಗೌಡಕುಲವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ, ಬೆಂಗಳೂರು, ೧೯೬೧
4 ಆರ್. ನರಸಿಂಹಾಚಾರ್ : ಕರ್ನಾಟಕ ಕವಿಚರಿತೆ, ಸಂಪುಟ ೨ (ದ್ವಿಮು), ೧೯೭೩, ಪು. ೨೬೦
5 ಪಿ. ವಿ. ಕೃಷ್ಣಮೂರ್ತಿ : 'ಕೆಂಪೇಗೌಡನ ಜಯಪ್ರಶಸ್ತಿ : ಒಂದು ಚಾರಿತ್ರಿಕ ಪರಿಶೀಲನೆ', ಇತಿಹಾಸ ದರ್ಶನ, ಸಂಪುಟ ೪, ೧೯೮೯, ಪು. ೧೧೮
6 ಕರ್ನಾಟಕ ಕವಿಚರಿತೆ, ಪು. ೧೪೬
7 ಅದೇ, ಪು. ೩೭೬
8 ಅದೇ, ಪು. ೬೫

೪ ವಾಹನ ಶಕವರುಷಂಗಳು ೧೫೨೮
೫ ನೆಯ ಪರಾಭವ ಸಂವತ್ಸರದ ಕಾರ್ತೀಕ ಬ
೬ ೧೨ ಸೋಮುವಾರದಲ್ಲು ॥ ಶ್ರೀಮದ್ರಾ
೭ ಜಾಧಿರಾಜ ಪರಮೇಶ್ವರ ಶ್ರೀ ವೀರಪ್ರ
೮ ತಾಪ ಶ್ರೀ ವೀರ ವೆಂಕಟಪತಿದೇವ ಮಹಾರಾ
೯ ಯರು ರತ್ನಸಿಂಹಾಸನರೂಢರಾಗಿ ಪ್ರಿಥುವೀ
೧೦ ಸಾಮ್ರಾಜ್ಯಂಗೆಯ್ಯುತ್ತಿರಲೂ ಚತುರ್ಥಗೋತ್ರದ
೧೧ ಯಲಹಂಕನಾಡ ಪ್ರಭು ಕೆಂಪನಾಚೇ*ಗೌಡರ ಪವುತ್ರರಾದ ಕೆಂಪೇ
೧೨ ಗೌಡರ ಪುತ್ರರಾದ ಯಿಂಮಡಿ ಕೆಂಪೇಗೌಡರು
೧೩ ಭಾರದ್ವಾಜ ಗೋತ್ರದ ಪಡಿವಿಡಿವರ್ಗದ
೧೪ ಕೊಲ್ಲಿಪಾಕಿ ರೇವಣಸಿದ್ಧೇಶ್ವರನ ಸಂಪ್ರದಾಯದವ
೧೫ ರಾದ ಗುಂಮಳಾಪುರದ ಸಿಂಹಾಸನ ಕರ್ತ
೧೬ ರಾದ ನಂಜೆದೇವರು ಅಯ್ಯನವರ ಪವುತ್ರರಾದ ಚೆಂ
೧೭ ನಮಲ್ಲಿಕಾರ್ಜುನದೇವರ ಪುತ್ರರಾದ ನಂಜದೇ
೧೮ ವ ಅಯ್ಯನವರ . . . . .
೧೯ ಯರ . . . . . ಮೇಲೂರೊಳಗಣ ಗುಂಮಳಾಪುರ
೨೦ ದ ಗ್ರಾಮುವನೂ । ಚತುರ್ಥ ಗೋತ್ರದ ಯಲಹಕನಾಡ
೨೧ ಪ್ರಭು ಕೆಂಪನಾಚೇಗೌಡರ ಪಉತ್ರರಾದ ಯಿಂಮಡಿ ಕೆಂಪೇ
೨೨ ಗೌಡರು ಭಾರದ್ವಾಜ ಗೋತ್ರದ ಪಡಿವಿಡಿವರ್ಗದ ಕೊಲ್ಲಿಪಾಕಿ
೨೩ ರೇವಣಸಿದ್ಧೇಶ್ವರನ ಸಂಪ್ರದಾಯಕರಾದ ಗುಂಮಳಾಪುರದ
೨೪ ಸಿಂಹಾಸನಕೆ ಕರ್ತರಾದ ನಂಜೇದೇವರು ಅಯ್ಯನವರ ಪವುತ್ರ
೨೫ ರಾದ ಚೆನ್ನಮಲ್ಲಿಕಾರ್ಜುನದೇವರ ಪುತ್ರರಾದ ನಂಜೇ
೨೬ ದೇವರು ಅಯ್ಯನವರ ಪಾದಕೆ . . . . . . . . . .
೨೭ ಸ್ವಾಮಿ ನಂಜದೇವಪ್ಪ ಅಯ್ಯನ . . . . ಪಾದಕೆ
೨೮ ಶಿವಾರ್ಪಿತವಾಗಿ ಸಮರ್ಪಿಸಿದೆವಾದ ಕಾರ
೨೯ ಣ

* ನಾಚೇ ಎಂಬುದನ್ನು 'ನಾಡ' ಎಂದು ಗ್ರಹಿಸಲಾಗಿದೆ. ನೋಡಿ : ಈ ಶಾಸನದ ಸಾರಾಂಶವನ್ನು ಪ್ರಕಟಿಸಿರುವ ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯ ವಾರ್ಷಿಕ ವರದಿ 'ಇಂಡಿಯನ್ ಎಪಿಗ್ರಫಿ', ೧೯೭೧-೭೨/ಬಿ ೧೯೫.